# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1307 |
| ಮಾನ್ಯ ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವ ಸಚಿವರು | : | ಪ್ರವಾಸೋದ್ಯಮ, ಪರಿಸರ ಹಾಗೂ ಜೀವಿಶಾಸ್ತ್ರ ಸಚಿವರು |
| ಉತ್ತರಿಸುವ ದಿನಾಂಕ | : | 15.03.2021 |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್‌ನಲ್ಲಿ ವಿಶ್ವದ ವಿಶಿಷ್ಟವಾಗಿರುವ ಕರೇಜ್ ಸುರಂಗ ಬಾವಿ ಇದ್ದು, ಇದು ಬಹುಮನಿ ಸುಲ್ತಾನರ ಕಾಲದಲ್ಲಿ ಕೊರೆಯಲಾದ ಐತಿಹಾಸಿಕ ಕುರುಹು ಆಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; | ಬಂದಿದೆ. |
| ಆ) | ಈ ಕರೇಜ್ ಸುರಂಗ ಬಾವಿಯ ಪುನರುಜ್ಜೀವನಕ್ಕೆ ಈವರೆಗೆ ಬಿಡುಗಡೆ ಮಾಡಿರುವ ಅನುದಾನ ಎಷ್ಟು; ವೆಚ್ಚ ಮಾಡಿರುವ ಅನುದಾನ ಎಷ್ಟು; ಕೈಗೆತ್ತಿಕೊಂಡಿರುವ ಕಾಮಗಾರಿಗಳು ಯಾವುವು; (ಪೂರ್ಣ ವಿವರ ನೀಡುವುದು) | ಬೀದರ್ ನಗರದ ವ್ಯಾಪ್ತಿಯಲ್ಲಿ ಬರುವ ಶಿಕಾರಗ ಮತ್ತು ಕರೇಜ್ ಪುನರುತ್ಥಾನ ಕರೇಜ್ ದಲ್ಲಿ ಹೂಳು ತೆಗೆಯುವುದು, ಸುತ್ತುಗೋಡೆ, ನೀರು ಶುದ್ಧೀಕರಣ ಕಿಂಡಿಗಳ ಸಂರಕ್ಷಣೆ, ಪ್ರವಾಸಿಗರಿಗೆ ಮೂಲಭೂತ ಸೌಕರ್ಯ ಹಾಗೂ ಉದ್ಯಾನವನ ಕಾಮಗಾರಿಯನ್ನು ರೂ.270ಲಕ್ಷಗಳ ಅಂದಾಜು ವೆಚ್ಚದಲ್ಲಿ ಅನುಷ್ಠಾನಗೊಳಿಸಲು ಮೊದಲ ಕಂತಾಗಿ ರೂ.50.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಬೀದರ್ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲಾಗಿರುತ್ತದೆ.<br><br>ಈ ಕಾಮಗಾರಿಗೆ ಲೋಕೋಪಯೋಗಿ ಇಲಾಖೆ, ಬೀದರ್ ರವರಿಂದ ಎರಡು ಬಾರಿ ಟೆಂಡರ್ ಕರೆಯಲಾಗಿದ್ದು, ಈ ಎರಡು ಟೆಂಡರ್‌ಗಳಲ್ಲಿ ಅರ್ಹ ಗುತ್ತಿಗೆದಾರರು ಆಯ್ಕೆಯಾಗಿರುವುದಿಲ್ಲ. 2019-20ನೇ ಸಾಲಿನಲ್ಲಿ ಸರ್ಕಾರದ ಆದೇಶ ಸಂಖ್ಯೆ: ಪ್ರಇ 147 ಪ್ರವಾಯೋ 2019, ದಿನಾಂಕ: 20.07.2019ರಲ್ಲಿ ಈ ಕಾಮಗಾರಿಯನ್ನು ರದ್ದುಪಡಿಸಿ ಆದೇಶಿಸಿರುವುದರಿಂದ, ಈ ಕಾಮಗಾರಿಗೆ ಬಿಡುಗಡೆ ಮಾಡಿರುವ ಮೊತ್ತ ರೂ.50.00 ಲಕ್ಷಗಳು ವೆಚ್ಚವಾಗಿರುವುದಿಲ್ಲ. |
| ಇ) | ಸರ್ಕಾರ ಅನುದಾನ ಬಿಡುಗಡೆ ಮಾಡಿದ್ದರೂ, ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಅನುದಾನ ಪೂರ್ಣ ಪ್ರಮಾಣದಲ್ಲಿ ಸದ್ಬಳಕೆ ಆಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಹಾಗಿದ್ದಲ್ಲಿ, ನಿರ್ಲಕ್ಷ್ಯ ತೋರಿದ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗುವುದು ; | ಈ ಕಾಮಗಾರಿಗೆ ಸಂಬಂಧಿಸಿದಂತೆ ಅಧಿಕಾರಿಗಳು ಯಾವುದೇ ನಿರ್ಲಕ್ಷ್ಯತೆ ತೋರಿರುವುದು ಕಂಡು ಬಂದಿರುವುದಿಲ್ಲ. |

..2/

| | | |
|---|---|---|
| ಈ | ಈ ಕರೇಜ್ ಸುರಂಗ ಬಾವಿಯ ಪುನರುಜ್ಜೀವನಕ್ಕೆ ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು ? | ಸುರಂಗ ಪ್ರವಾಸೋದ್ಯಮವನ್ನು (Tunnel Tourism) ಪ್ರವಾಸೋದ್ಯಮ ಉತ್ಪನ್ನವಾಗಿ ಅಭಿವೃದ್ಧಿಪಡಿಸುವ ಸಾಧ್ಯತೆಯ ಬಗ್ಗೆ, ಭಾರತ ಸರ್ಕಾರವು 'Niche Tourism' ಉತ್ಪನ್ನವಡಿಯಲ್ಲಿ ರಾಜ್ಯಗಳ ಪ್ರಸ್ತಾವನೆಯನ್ನು ಸಲ್ಲಿಸಲು ಕೋರಿದ್ದು, ಅದರಂತೆ, ಸುರಂಗ ಪ್ರವಾಸೋದ್ಯಮ ಯೋಜನೆಯಡಿ ಬೀದರ್ ಮತ್ತು ವಿಜಯಪುರ ಜಿಲ್ಲೆಯಲ್ಲಿನ ಸೀರಿನ ಕರೇಜ್ ಪುನರುತ್ಥಾನ ಯೋಜನೆಗೆ ಸಂಬಂಧಿಸಿದಂತೆ M/s. Indian Heritage Cites Network Foundation (IHCNF) ಬೆಂಗಳೂರು ರವರು ಸಲ್ಲಿಸಿರುವ ಎರಡು ವರದಿ/ ಪ್ರಸ್ತಾವನೆಗಳನ್ನು 'Niche Tourism' ಉತ್ಪನ್ನದಡಿಯಲ್ಲಿ ಪರಿಗಣಿಸುವಂತೆ ಕೇಂದ್ರ ಪ್ರವಾಸೋದ್ಯಮ ಮಂತ್ರಾಲಕ್ಕೆ ದಿ :23.06.2020ರಂದು ಸಲ್ಲಿಸಲಾಗಿರುತ್ತದೆ.<br><br>ಕರೇಜ್ ಸುರಂಗ ಬಾವಿಯ ಪುನರುಜ್ಜೀವನದ ಪ್ರಸ್ತಾವನೆಯು ಸಧ್ಯ ಸರ್ಕಾರದ ಮುಂದೆ ಇರುವುದಿಲ್ಲ. |

ಸಂಖ್ಯೆ: ಟಿಒಆರ್ 33 ಟಿಡಿವಿ 2021.

(ಸಿ.ಪಿ. ಯೋಗೇಶ್ವರ್)
ಪ್ರವಾಸೋದ್ಯಮ ಮತ್ತು ಪರಿಸರ ಹಾಗೂ
ಜೀವಿಶಾಸ್ತ್ರ ಸಚಿವರು